ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)



ಸಂಪುಟ : ೦೭
ಸಂಚಿಕೆ : ೧೮

೧೮ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಏಪ್ರಿಲ್–ಜೂನ್ ೨೦೧೧

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



## ಪರಿವಿಡಿ



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭,೨೬೬೭೬೭೭೩
ಇಮೇಲ್ :
bmsritrust@gmail.com

ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥, ಮಂಡ್ಯ ಜಿಲ್ಲೆ.

# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಂಸ್ಥಾಪನಾ ದಿನಾಚರಣೆ



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

೬-೫-೨೦೧೧ರ ಸಂಜೆ ೬-೦೦ ಗಂಟೆಗೆ ೩೨ನೇ ವರ್ಷದ ಸಂಸ್ಥಾಪನಾ ದಿನಾಚರಣೆ, ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ಪ್ರದಾನ ಸಮಾರಂಭ ಹಾಗೂ ತಿಂಗಳ ಸಂಗೀತ ಮಾಲಿಕೆಯಡಿ 'ಸಿರಿಸಂಗೀತ' ಕಾರ್ಯಕ್ರಮಗಳು ನಡೆದವು.




೬-೫-೧೧, ೩೨ನೇ ವರ್ಷದ ಸಂಸ್ಥಾಪನಾ ದಿನಾಚರಣೆ.
ಗಮಕ ದಂಪತಿ ಡಾ. ಎ. ವಿ. ಪ್ರಸನ್ನ ಮತ್ತು ಶ್ರೀಮತಿ ನಿರ್ಮಲ ಪ್ರಸನ್ನ ಅವರಿಂದ ಗಮಕವಾಚನ ಕಾರ್ಯಕ್ರಮ

# ಸಂಪಾದಕೀಯ

ಪ್ರಾಚೀನವಾದ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳ ಜಂಗಮ ಸ್ಥಿತಿ ದಿನೇ ದಿನೇ ಕುಂಠಿತಗೊಳ್ಳುತ್ತ ಬಂದು ಇದೀಗ ಸ್ಥಾವರದತ್ತ ದಾಪುಗಾಲು ಹಾಕುತ್ತಿದೆ. ಅನಪೇಕ್ಷಿತ ಈ ಪರಿವರ್ತನೆ ಪ್ರಗತಿಯ ದ್ಯೋತಕವಲ್ಲ.

ಸಾಹಿತ್ಯ ಮತ್ತು ಸಂಸ್ಕೃತಿಗಳ ಚಾಲನೆ ಊರ್ಧ್ವಮುಖಿಯಾಗಿದ್ದರೆ ಅದು ಸ್ವಾಗತಾರ್ಹ. ಆದರೆ ಈಗಿನ ಕನ್ನಡ ನುಡಿಯ ಬೆಳವಣಿಗೆ ಹಾಗೂ ಪ್ರಗತಿಯನ್ನು ಅವಲೋಕಿಸಿದರೆ ಅವು ನಾವು ಇಚ್ಛಿಸಿದ ಮಟ್ಟದಲ್ಲಿ ಸಾಧಿತವಾಗಿಲ್ಲವೆಂಬುದು ಎದ್ದುಕಾಣುತ್ತದೆ. ಸುಮಾರು ೧೦೦ ವರ್ಷಗಳಷ್ಟು ಹಿಂದಿದ್ದ ಸ್ಥಿತಿಯೇ ಇಂದೂ ಇದೆ ಎಂದು ಗಮನಿಸಿದರೆ ನಮ್ಮ ನಿರಭಿಮಾನದ ಬಗ್ಗೆ ಜುಗುಪ್ಸೆ ಮೂಡುತ್ತದೆ. ಈ ನಿಷ್ಕ್ರಿಯತೆ ಮನೋಭಾವ ಅಕ್ಷಮ್ಯ ಅಪರಾಧವೆನಿಸುತ್ತಿದೆ.

ಹಿಂದೆ ನಮ್ಮ ಹಿರಿಯ ಸಾಹಿತಿಗಳು ನಾಡು, ನುಡಿ, ಸಂಸ್ಕೃತಿಯ ಬಗ್ಗೆ ಹೇಳಿರುವ ಮಾತುಗಳು, ಸಲಹೆಗಳು ಇಂದೂ ಪ್ರಸ್ತುತವೆನಿಸುತ್ತಿವೆ.

**ಕೆಲವು ಹಿರಿಯರ ಹಿತನುಡಿಗಳು**

'....ಜ್ಞಾನವನ್ನೂ ಪಾಂಡಿತ್ಯವನ್ನೂ ಸಂಪಾದಿಸುವುದಕ್ಕೆ ಭಾಷೆಯು ಒಂದು ಸಾಧಕ ಸಾಮಗ್ರಿಯಾಗಿದೆ. ಭಾಷೆಯು ಎಷ್ಟೆಷ್ಟು ಅನುಕೂಲ ಸ್ಥಿತಿಗೆ ಬರುವುದೋ ಅಷ್ಟಷ್ಟು ಉದ್ದೇಶ ಸಾಧನವು ಸುಲಭವಾಗುತ್ತ ಬರುವುದು....'

*–ಎಚ್.ವಿ. ನಂಜುಂಡಯ್ಯ (೧೯೧೫)*

'....ಪ್ರಕೃತ ಕಾಲಕ್ಕೆ ಅನುಗುಣವಾಗಿ ಕನ್ನಡಿಗರೆಲ್ಲರೂ ಅಸಡ್ಡೆಯನ್ನು ತೊಲಗಿಸಿ ಭಾಷಾಸೇವೆಯಲ್ಲಿ ನಿರತರಾಗಬೇಕು. ಪಂಡಿತರನ್ನು ಗೌರವಿಸಬೇಕು, ಕನ್ನಡ ನುಡಿಗಾಗಿ ಶ್ರಮಿಸುವವರಿಗೆ ಮರ್ಯಾದೆಯನ್ನು ಮಾಡಬೇಕು....'

*– ಆರ್. ನರಸಿಂಹಾಚಾರ್ (೧೯೧೮)*

'....ದೇಶಭಾಷೆಯನ್ನು ವಿರೂಪಗೊಳಿಸಿ ಅದರ ಹುಟ್ಟನ್ನು ಕೆಡಿಸುವುದರಲ್ಲಿ ಇಂಗ್ಲೀಷ್ ಅಭ್ಯಾಸ ಮಾಡಿರುವ ನಮ್ಮ ಕನ್ನಡಿಗರನ್ನು ಬಿಟ್ಟರೆ ಯಾರೂ ಇಲ್ಲ....' *– ಕೆ. ಪಿ. ಪುಟ್ಟಣ್ಣ ಶೆಟ್ಟಿ (೧೯೨೧)*

'....ಭಾಷೆಗೆ ಕುಲವಿಲ್ಲ, ಗೋತ್ರವಿಲ್ಲ, ಮತವಿಲ್ಲ. ಅದು ಎಲ್ಲರಿಗೂ ಸೇರಿದುದು....'

*– ಎಂ. ವೆಂಕಟಕೃಷ್ಣಯ್ಯ (೧೯೨೨)*

'....ನಮ್ಮ ಕನ್ನಡಿಗರಿಗೆ ಇವರ ಪೂರ್ವದ ಸೌಭಾಗ್ಯವನ್ನು ಜ್ಞಾಪಕಕ್ಕೆ ತಂದುಕೊಡಬೇಕು. ಮತ್ತು ಇಂದಿನ ದುಸ್ಥಿತಿಯಲ್ಲಿಯೂ ಕನ್ನಡಿಗರಿಂದ ಪ್ರಪಂಚದ ಉನ್ನತಿಗಾಗಿ ಮಹತ್ತರವಾದ ಸೇವೆಯು ನಡೆಯತಕ್ಕದಾಗಿದೆಯೆಂಬುದನ್ನು ಮನಮುಟ್ಟುವಂತೆ ಹೇಳಬೇಕು....'

*– ಬೆನಗಲ್ ರಾಮರಾವ್ (೧೯೨೫)*

'....ಕರ್ನಾಟಕತ್ವವೆಂದರೆ ತನ್ನ ದೇಶದ ಸಂಸ್ಕೃತಿಯ ಅರಿವು ಮತ್ತು ಅದನ್ನೇ ಅರಿತು ಆಚರಿಸುವುದು. ಅಂಥ ಆಚರಣೆಯೇ ದೇಶದ ಪ್ರಗತಿಯ ಕುರುಹು....' *– ಫ. ಗು. ಹಳಕಟ್ಟಿ*

'....ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ....' *–ಬಿ.ಎಂ.ಶ್ರೀ. (೧೯೨೮)*

'....ಮಾತೃಭಾಷೆಯಲ್ಲಿ ಅಥವಾ ಅದಕ್ಕೆ ಸಮನಾದ ಭಾಷೆಯಲ್ಲಿ ಪಾಠ ಕಲಿಸುವುದರಿಂದ ಬರುವ ಸಂಸ್ಕಾರವು ಬೇರೆ ಯಾವ ಭಾಷೆಯಿಂದ ಕಲಿಸಿದರೂ ಬರುವುದಿಲ್ಲ....' *– ಮಾಸ್ತಿ ವೆಂಕಟೇಶ ಅಯ್ಯಂಗಾರ್*

'....ಕರ್ನಾಟಕತ್ವವೆಂದರೆ ಕೇವಲ ದೇಶಾಭಿಮಾನವಲ್ಲ. ಕೇವಲ ಭಾಷಾಭಿಮಾನವಲ್ಲ. ಕೇವಲ ಇತಿಹಾಸಾಭಿಮಾನವಲ್ಲ. ಇವೆಲ್ಲಗಳನ್ನೂ ಮೀರಿದ, ಇವೆಲ್ಲವುಗಳನ್ನು ಒಳಗೊಂಡ ಪರಿಶುದ್ಧ ಭಾವನೆ....' *– ಆಲೂರು ವೆಂಕಟರಾಯರು*

* * *

ಹಿರಿಯರ ಭಾವನೆ, ಆಶಯ ಹಾಗೂ ಸಲಹೆ ಸೂಚನೆಗಳನ್ನು ಶ್ರದ್ಧಾಪೂರ್ವಕವಾಗಿ ಪಾಲಿಸಿದರೆ ನಮ್ಮ ನಾಡು, ನುಡಿ ಪ್ರಗತಿಯತ್ತ ಸಾಗುವುದರಲ್ಲಿ ಸಂದೇಹವಿಲ್ಲ. ಇದರತ್ತ ನಾವು ಗಮನಹರಿಸುವುದು ಅತ್ಯಗತ್ಯವಾಗಿದೆ. ಕನ್ನಡ ನುಡಿಯ ಸೇವೆಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಶ್ರದ್ಧಾಪೂರ್ವಕವಾಗಿ ನಿಷ್ಠೆಯಿಂದ ದುಡಿಯುತ್ತಿದೆ. ನಮ್ಮ ಈ ಅಭಿಯಾನದಲ್ಲಿ ಕನ್ನಡಿಗರು ಹಾಗೂ ಕನ್ನಡಾಭಿಮಾನಿಗಳೆಲ್ಲಾ ನಮ್ಮೊಡನೆ ಕೈಜೋಡಿಸಿದರೆ ಕುಸಿಯುತ್ತಿರುವ ಕನ್ನಡಾಭಿಮಾನವನ್ನು ಸ್ವಲ್ಪವಾದರೂ ಮೇಲೆತ್ತಲು ಸಹಕರಿಸಿದಂತಾಗುತ್ತದೆ. ದಯವಿಟ್ಟು ಬನ್ನಿ, ಸದಸ್ಯರಾಗಿ, ನಮ್ಮ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳಿ ಎಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

**–ಎಸ್. ವಿ. ಶ್ರೀನಿವಾಸರಾವ್**, ಸಂಪಾದಕರು

# ಪ್ರತಿಷ್ಠಾನದ ವಾರ್ತೆ

**೬-೫-೨೦೧೧ರ ಸಂಜೆ ೬-೦೦ ಗಂಟೆಗೆ ೩೨ನೇ ವರ್ಷದ ಸಂಸ್ಥಾಪನಾ ದಿನಾಚರಣೆ, ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ಪ್ರದಾನ ಸಮಾರಂಭ ಹಾಗೂ ತಿಂಗಳ ಸಂಗೀತ ಮಾಲಿಕೆಯಡಿ 'ಸಿರಿಸಂಗೀತ' ಕಾರ್ಯಕ್ರಮಗಳು ನಡೆದವು.** ಕಾರ್ಯಕ್ರಮಗಳ ಉದ್ಘಾಟನೆಯನ್ನು ಗೌರವಾಧ್ಯಕ್ಷರಾದ ನಾಡೋಜ ಜಿ. ನಾರಾಯಣ ನಡೆಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ವಹಿಸಿದ್ದರು. ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿಯನ್ನು ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀಗಳು, ಶ್ರೀಮತಿ ಶಾರದಾ ವಿ. ಮೂರ್ತಿ ಯವರ ಮಕ್ಕಳ 'ಮಾತನಾಡಿ ಗೊಂಬೆಗಳೆ' ಕೃತಿಗೆ ನೀಡಿ ಕೃತಿಯನ್ನು ಪ್ರಶಂಸಿಸಿದರು. ಪ್ರತಿಷ್ಠಾನದ ಸಂಸ್ಥಾಪನಾ ದಿನಾಚರಣೆ ಬಗ್ಗೆ ಶ್ರೇಷ್ಠ ವಿಮರ್ಶಕರಾದ ಪ್ರೊ. ಎಲ್. ಎಸ್. ಶೇಷಗಿರಿರಾವ್ ಮಾತನಾಡಿ ಅವರ ಹಾಗೂ ಪ್ರೊ. ಎಂ.ವಿ.ಸೀ. ಅವರ ಜೊತೆಗಿನ ಮಧುರ ಸ್ನೇಹ ಸಂಬಂಧದ ನೆನಪು ಮಾಡಿಕೊಂಡರು. ಸ್ಪರ್ಧೆಯ ಮೌಲ್ಯಮಾಪಕರ ಪರವಾಗಿ ಖ್ಯಾತ ಸಾಹಿತಿ ಶ್ರೀ ರವಿಯವರು ಕೃತಿಯ ವೈಶಿಷ್ಟ್ಯಗಳ ಬಗ್ಗೆ ಮಾತನಾಡಿದರು. ಪ್ರಶಸ್ತಿ ಸ್ವೀಕರಿಸಿದ ಶ್ರೀಮತಿ ಶಾರದಾ ವಿ. ಮೂರ್ತಿ ಮೌಲ್ಯಮಾಪಕರಿಗೆ ಹಾಗೂ ಪ್ರತಿಷ್ಠಾನಕ್ಕೆ ತಮ್ಮ ಕೃತಜ್ಞತೆ ಸಲ್ಲಿಸಿದರು. ಈ ಕಾರ್ಯಕ್ರಮದ ಕೊನೆಯಲ್ಲಿ ನಾಡಿನ ಖ್ಯಾತ ಗಮಕ ದಂಪತಿಗಳಾದ ಡಾ. ಎ. ವಿ. ಪ್ರಸನ್ನ ಹಾಗೂ ಶ್ರೀಮತಿ ನಿರ್ಮಲ ಪ್ರಸನ್ನ ಗಮಕವಾಚನದೊಡನೆ ವ್ಯಾಖ್ಯಾನ ನಡೆಸಿ ಸಭಿಕರ ಮನರಂಜಿಸಿದರು. ಕಾರ್ಯಕ್ರಮದ ಪ್ರಾರಂಭದಲ್ಲಿ ವ್ಯ. ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಎಲ್ಲರನ್ನೂ ಸ್ವಾಗತಿಸಿ ಅತಿಥಿಗಳ ಪರಿಚಯ ಮಾಡಿದರು. ಕೊನೆಯಲ್ಲಿ ಡಾ. ಗೀತಾಚಾರ್ಯ ಎಲ್ಲರನ್ನೂ ವಂದಿಸಿದರು.



೬-೫-೧೧ ೩೨ನೇ ವರ್ಷದ ಸಂಸ್ಥಾಪನಾ ದಿನಾಚರಣೆ, ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ಪ್ರದಾನ ಸಮಾರಂಭ ಮತ್ತು ತಿಂಗಳ ಸಂಗೀತ ಮಾಲಿಕೆಯಡಿ 'ಸಿರಿಸಂಗೀತ'

**೭-೫-೧೧ರ ಸಂಜೆ ೬-೦೦ ಗಂಟೆಗೆ ನಾರಾಯಣ ಸಂಸ್ಕೃತಿ ಕೇಂದ್ರ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ 'ರಾಮಾನುಜರು ಮತ್ತು ನಾರಾಯಣ ಶರ್ಮ ಜಯಂತಿ' ಹಾಗೂ 'ಹರಿದಾಸರು ಕಂಡ ರಾಮಾನುಜ ದರ್ಶನ'** (ಸಂಪಾದಕರು ಡಾ. ನಾ. ಗೀತಾಚಾರ್ಯ) ಈ ಗ್ರಂಥದ ಲೋಕಾರ್ಪಣಾ ಕಾರ್ಯಕ್ರಮ ಜರುಗಿತು. ಕರ್ನಾಟಕ ರಾಜ್ಯ ಸಂಸ್ಕೃತ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಗ್ರಂಥವನ್ನು ಲೋಕಾರ್ಪಣೆಗೊಳಿಸಿ ಅದರಲ್ಲಿನ ಮೌಲ್ಯಗಳ ಬಗ್ಗೆ ಬೆಳಕು ಚೆಲ್ಲಿದರು. ಪ್ರಾರಂಭದಲ್ಲಿ ಡಾ. ನಾ. ಗೀತಾಚಾರ್ಯ ಅವರು ಪ್ರಸ್ತಾವಿಕ ಭಾಷಣ ಮಾಡಿ ನಾರಾಯಣ ಶರ್ಮರ ವಿದ್ವತ್ತಿನ ಬಗ್ಗೆ ಹಾಗೂ ಸಂಸ್ಕೃತಿ ಕೇಂದ್ರ ಚಟುವಟಿಕೆಗಳ ಬಗ್ಗೆ ವಿವರ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಖ್ಯಾತ ಉಪನ್ಯಾಸಕ, ವಿಮರ್ಶಕ ಪ್ರೊ. ಜಿ. ಅಶ್ವತ್ಥನಾರಾಯಣ ಆಗಮಿಸಿದ್ದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಖ್ಯಾತ ವಿದುಷಿ ಶ್ರೀಮತಿ ಸುಕನ್ಯ ವಿಜಯಕುಮಾರ್ ಮತ್ತು ಸಂಗಡಿಗರಿಂದ ಸಂಗೀತ ಕಾರ್ಯಕ್ರಮ ನಡೆಯಿತು. ಕೊನೆಯಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ವಂದನಾರ್ಪಣೆ ಮಾಡಿದರು.




೭-೫-೧೧ ನಾರಾಯಣ ಸಂಸ್ಕೃತಿ ಕೇಂದ್ರ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ ರಾಮಾನುಜರು ಮತ್ತು ನಾರಾಯಣ ಶರ್ಮ ಜಯಂತಿ ಹಾಗೂ ಹರಿದಾಸರು ಕಂಡ ರಾಮಾನುಜ ದರ್ಶನ ಕೃತಿ ಲೋಕಾರ್ಪಣೆ

೧೫-೫-೧೧ರ ಬೆಳಗ್ಗೆ ೧೦-೩೦ ಗಂಟೆಗೆ ಕೊರಟಿ ಶ್ರೀನಿವಾಸರಾವ್ ಸ್ಮಾರಕ ದತ್ತಿಯಡಿ ಅವರ ಐತಿಹಾಸಿಕ ಕಾದಂಬರಿಗಳ ಬಗ್ಗೆ ವಿಚಾರ ಸಂಕಿರಣ ಕಾರ್ಯಕ್ರಮ ನಡೆಯಿತು.



೧೫-೫-೨೦೧೧ ಕೊರಟಿ ಶ್ರೀನಿವಾಸರಾವ್ ಸ್ಮಾರಕ ದತ್ತಿ ಕಾರ್ಯಕ್ರಮ ಕೊರಟಿ ಶ್ರೀನಿವಾಸರಾವ್ ಅವರ ಐತಿಹಾಸಿಕ ಕಾದಂಬರಿಗಳು-ವಿಚಾರ ಸಂಕಿರಣ



೧೫-೫-೨೦೧೧ ಕೊರಟಿ ಶ್ರೀನಿವಾಸರಾವ್ ಸ್ಮಾರಕ ದತ್ತಿ ಉದ್ಘಾಟನೆ ಮತ್ತು ಅವರ ಐತಿಹಾಸಿಕ ಕಾದಂಬರಿಗಳು-ವಿಚಾರ ಸಂಕಿರಣ

ಖ್ಯಾತ ಇತಿಹಾಸ ತಜ್ಞ ಡಾ. ಸೂರ್ಯನಾಥ ಕಾಮತರು ಕಾರ್ಯಕ್ರಮ ಉದ್ಘಾಟಿಸಿ ಕೊರಟಿ ಶ್ರೀನಿವಾಸರಾವ್ ಅವರ ಐತಿಹಾಸಿಕ ಕಾದಂಬರಿಗಳ ಬಗ್ಗೆ ವಿಚಾರಪೂರ್ಣ ಮಾಹಿತಿ ನೀಡಿದರು. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜ್ ಮುಖ್ಯ ಅತಿಥಿಗಳಾಗಿ ಆಗಮಿಸಿ ದತ್ತಿ ಬಗ್ಗೆ ವಿವರ ಮಂಡಿಸಿದರು. ಕೊರಟಿ ಅವರ ಪುತ್ರಿ ಪ್ರೊ. (ಕ್ಯಾಪ್ಟನ್) ಕೆ. ಎಸ್. ಗಾಯಿತ್ರಿ ತಮ್ಮ ತಂದೆಯವರ ಸಾಹಿತ್ಯ ಕೊಡುಗೆಯ ಬಗ್ಗೆ ಮೌಲಿಕ ವಿವರ ನೀಡಿ, ಅವರ ಸೋಪಜ್ಞತೆಯನ್ನು, ಕ್ರಿಯಾಶೀಲತೆಯನ್ನು ಶ್ಲಾಘಿಸಿದರು. ನಾಡೋಜ ಜಿ. ನಾರಾಯಣ ಅವರ ಅನುಪಸ್ಥಿತಿಯಲ್ಲಿ ಹಿರಿಯ ಸಾಹಿತಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅಧ್ಯಕ್ಷತೆ ವಹಿಸಿದ್ದರು. ಅನಂತರ ಎರಡು ಗೋಷ್ಠಿಗಳು ನಡೆದವು. ಮೊದಲನೆಯ ಗೋಷ್ಠಿಯ ಅಧ್ಯಕ್ಷತೆಯನ್ನು ಖ್ಯಾತ ಐತಿಹಾಸಿಕ ತಜ್ಞ ಡಾ. ಎಚ್. ಎಸ್. ಗೋಪಾಲರಾವ್ ವಹಿಸಿ ಕೊರಟಿಯವರ ಐತಿಹಾಸಿಕ ಪ್ರಜ್ಞೆ ಬಗ್ಗೆ ಅಪೂರ್ವ ಮಾಹಿತಿ ನೀಡಿದರು.




೧೫-೫-೨೦೧೧ ಕೊರಟಿ ಶ್ರೀನಿವಾಸರಾವ್ ಸ್ಮಾರಕ ದತ್ತಿ ಉದ್ಘಾಟನೆ ಮತ್ತು ಅವರ ಐತಿಹಾಸಿಕ ಕಾದಂಬರಿಗಳು-ವಿಚಾರ ಸಂಕಿರಣ

ಡಾ.ಶ್ಯಾಮಲಾ ರತ್ನಕುಮಾರಿಯವರು 'ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಕುರಿತ ಕಾದಂಬರಿಗಳ ಮೌಲಿಕತೆಯನ್ನು ವಿವರಿಸಿದರು. ಡಾ. ಕೆ. ರಮಾನಂದ ಅವರು ವಿಜಯನಗರ ಸಾಮ್ರಾಜ್ಯದ ವೈಭವ ಕುರಿತ ಕಾದಂಬರಿಗಳ ಪರಿಚಯ ಮಾಡಿಸಿದರು.

ಎರಡನೆ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದ ಖ್ಯಾತ ಪ್ರಾಧ್ಯಾಪಕ ಪ್ರೊ. ಎನ್. ಬಿ. ಚಂದ್ರಮೋಹನ್ ಸೃಜನಶೀಲತೆ ಮತ್ತು ಐತಿಹಾಸಿಕತೆ ಬಗ್ಗೆ ಮಾತನಾಡಿದರು. ಡಾ. ಶಾಂಭವಿ ಅವರು ವಿಜಯನಗರ ಪತನ ಕುರಿತ ಕಾದಂಬರಿಗಳ ಪರಿಚಯ ಮಾಡಿಸಿದರು. ಸಂಜೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಾನಪದ ತಜ್ಞ ಪ್ರೊ. ಡಿ. ಲಿಂಗಯ್ಯ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಡಾ. ದೇವರ ಕೊಂಡಾರೆಡ್ಡಿ, ಅಧ್ಯಕ್ಷರು ಇತಿಹಾಸ ಅಕಾಡೆಮಿ, ಆಗಮಿಸಿ ಕೊರಟಿಯವರ ಬಹುಮುಖ ವಿದ್ವತ್ತಿನ ಪರಿಚಯ ಮಾಡಿಕೊಟ್ಟರು. ಹಿರಿಯ ಸಾಹಿತಿ ಪ್ರೊ. ಜಿ. ಅಶ್ವತ್ಥನಾರಾಯಣ ಸಮಾರೋಪ ಭಾಷಣದಲ್ಲಿ

ಬೆಳಗ್ಗೆಯಿಂದ ಸಂಜೆಯವರೆಗೆ ನಡೆದ ಈ ಅಪರೂಪದ ಕಾರ್ಯಕ್ರಮದ ವೈಶಿಷ್ಟ್ಯತೆಯನ್ನು ಶ್ಲಾಘಿಸಿದರು. ತಮ್ಮ ಹಾಗೂ ಕೊರಟಿಯವರ ಮಧ್ಯೆಯಿದ್ದ ಸ್ನೇಹ ಸಂಬಂಧದ ಕೆಲ ಸವಿ ನೆನಪುಗಳನ್ನು ಜ್ಞಾಪಿಸಿಕೊಂಡರು. ಕೊನೆಯಲ್ಲಿ ಡಾ. ನಾ. ಗೀತಾಚಾರ್ಯ ವಂದನಾರ್ಪಣೆ ಕಾರ್ಯ ನೆರವೇರಿಸಿದರು.

**೨೧-೫-೨೦೧೧ ಸಂಜೆ ೬ ಗಂಟೆಗೆ : ಹಸ್ತಪ್ರತಿ ಶಾಸ್ತ್ರ ಮತ್ತು ಹಳಗನ್ನಡ ಕಾವ್ಯಾಭ್ಯಾಸ ಶಿಬಿರದ ವಿದ್ಯಾರ್ಥಿಗಳ ವೇದಿಕೆ ವತಿಯಿಂದ ಕಾರ್ಯಕ್ರಮ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಲಾಭವನದಲ್ಲಿ ನಡೆಯಿತು.** ಪ್ರೊ. ಕೆ. ಎಸ್. ಮಧುಸೂದನ್ ಅವರು 'ಮೋಕ್ಷಾಂಬಿಕಾ ಪರಿಣಯ' ಎಂಬ ಕಾವ್ಯದ ಬಗ್ಗೆ ಉಪನ್ಯಾಸ ನೀಡಿದರು. ಪ್ರತಿಷ್ಠಾನದ ಅಧ್ಯಕ್ಷ ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಡಾ. ಶ್ಯಾಮಲಾ ರತ್ನಕುಮಾರಿ ಸ್ವಾಗತಿಸಿದರು. ಶ್ರೀ ಗೋವರ್ಧನ್ ವಂದನಾರ್ಪಣೆ ಮಾಡಿದರು.

**೧೨-೬-೨೦೧೧ ಬೆಳಿಗ್ಗೆ ೧೧-೦೦ ಗಂಟೆಗೆ : ಸಿ. ಕೆ. ನಾಗರಾಜ್‌ರಾವ್ ದತ್ತಿ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ. ಡಿ. ಲಿಂಗಯ್ಯ ವಹಿಸಿದ್ದರು.** ಖ್ಯಾತ ವಿದ್ವಾಂಸರಾದ ಶ್ರೀ ಎನ್. ಎಸ್. ಅಶ್ವತ್ಥನಾರಾಯಣ ಶಾಸ್ತ್ರಿ (ನೈಷಧಂ ಎಸ್ಸೆ) ಅವರು ಸಿ. ಕೆ. ನಾಗರಾಜರಾವ್ ನಾಟಕಗಳು– 'ಒಂದು ಮರು ಓದು' ಕುರಿತು ವಿಚಾರಪೂರ್ಣ ಉಪನ್ಯಾಸ ನೀಡಿದರು. ಪ್ರಾರಂಭದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಸರ್ವರನ್ನೂ ಸ್ವಾಗತಿಸಿ ಅತಿಥಿಗಳ ಪರಿಚಯ ಮತ್ತು ಸಿ. ಕೆ. ನಾಗರಾಜರಾವ್ ಅವರ ಬಹುಮುಖ ಪ್ರತಿಭೆಯ ಮೇಲೆ ಬೆಳಕು ಚೆಲ್ಲಿದರು. ಸಿ.ಕೆ. ನಾಗರಾಜರಾವ್ ಅವರ ಕುಟುಂಬ ವರ್ಗದವರನ್ನು ವಿಶೇಷವಾಗಿ ಸ್ವಾಗತಿಸಿ ಅವರು ತೋರುತ್ತಿರುವ ಆಸಕ್ತಿಗೆ ಅವರನ್ನು ಅಭಿನಂದಿಸಿದರು. ಕೊನೆಯಲ್ಲಿ ವಂದನಾರ್ಪಣೆ ಸಹ ಅವರೇ ಮಾಡಿ ಸಿ. ಕೆ. ನಾಗರಾಜರಾವ್ ಅವರ ಮಗ ಸರ್ವೇಶ್ ಅವರಿಗೆ ಪ್ರತಿಷ್ಠಾನದ ವತಿಯಿಂದ ವಿಶೇಷ ಕೃತಜ್ಞತೆ ಸಲ್ಲಿಸಿದರು.




**೧೮-೬-೨೦೧೧ 'ಸಿರಿಕಂಟ' ವಿದ್ಯಾರ್ಥಿ ವೇದಿಕೆಯಿಂದ ಎಂ.ಫಿಲ್, ಪಿಎಚ್.ಡಿ, ಹಳಗನ್ನಡ, ಹಸ್ತಪ್ರತಿ ತರಗತಿ ಮಾರ್ಗದರ್ಶಕ/ಅಧ್ಯಾಪಕರಿಗೆ 'ಗುರುವಂದನಾ ಕಾರ್ಯಕ್ರಮ'**



**೧೮-೬-೨೦೧೧ 'ಸಿರಿಕಂಟ' ವಿದ್ಯಾರ್ಥಿ ವೇದಿಕೆಯಿಂದ ಎಂ.ಫಿಲ್, ಪಿ.ಎಚ್.ಡಿ, ಹಳಗನ್ನಡ, ಹಸ್ತಪ್ರತಿ ತರಗತಿ ಮಾರ್ಗದರ್ಶಕ/ಅಧ್ಯಾಪಕರಿಗೆ 'ಗುರುವಂದನಾ ಕಾರ್ಯಕ್ರಮ'**

**೧೮-೬-೨೦೧೧ ಸಂಜೆ ೬-೦ ಗಂಟೆಗೆ ಪ್ರತಿಷ್ಠಾನದ 'ಸಿರಿಕಂಟ' ವೇದಿಕೆ ಎಂ.ಫಿಲ್. ಮತ್ತು ಪಿಎಚ್.ಡಿ. ಹಳಗನ್ನಡ, ಹಸ್ತಪ್ರತಿ ತರಗತಿ ವಿದ್ಯಾರ್ಥಿಗಳು ಮಾರ್ಗದರ್ಶಕರಿಗೆ ಹಾಗೂ ಗೌ॥ ಅಧ್ಯಾಪಕರುಗಳಿಗೆ 'ಗುರುವಂದನ ಕಾರ್ಯಕ್ರಮ' ಏರ್ಪಡಿಸಿದ್ದರು.** ವಿಶೇಷ ಅತಿಥಿಗಳಾಗಿ ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ ಮತ್ತು ಡಾ. ಎಸ್. ನಾಗರಾಜ್ ಆಗಮಿಸಿದ್ದರು. ಡಾ. ನಾ. ಗೀತಾಚಾರ್ಯ ಪ್ರಾಸ್ತಾವಿಕ ಭಾಷಣ ಮಾಡಿ ಈ ಮೇಲ್ಕಂಡ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು.

ಗೌ॥ ಮಾರ್ಗದರ್ಶಕರುಗಳಾದ ಡಾ. ಕೆ.ವಿ. ರಮೇಶ್, ಡಾ. ಆರ್. ಲಕ್ಷ್ಮೀನಾರಾಯಣ್, ಗೌ॥ ಅಧ್ಯಾಪಕರುಗಳಾದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಎಂ. ಎಲ್. ಲಲಿತಮ್ಮ, ಡಾ. ಪಿ. ವಿ. ಕೃಷ್ಣಮೂರ್ತಿ ಡಾ. ನಾ. ಗೀತಾಚಾರ್ಯ, ಡಾ. ವಿಜಯಾ ಸುಬ್ಬರಾಜ್ ಆಗಮಿಸಿದ್ದರು. ಇವರುಗಳಿಗೆ ವಿದ್ಯಾರ್ಥಿ ವೃಂದ ಗೌರವಪೂರ್ವಕವಾಗಿ ಶಾಲು ಹೊದಿಸಿ, ಫಲತಾಂಬೂಲ ನೀಡಿ ಗುರುವಂದನೆ ಸಲ್ಲಿಸಿದರು. ಹಾಗೆಯೇ ಪ್ರತಿಷ್ಠಾನದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಹಾಗೂ ಸಿಬ್ಬಂದಿವರ್ಗದವರನ್ನು ಸನ್ಮಾನಿಸಿದರು. ಶ್ರೀ ಸಂಕಂ ಗೋವರ್ಧನ್ ಸ್ವಾಗತಿಸಿ ಕಾರ್ಯಕ್ರಮ ನಿರೂಪಿಸಿದರು ಡಾ. ಶ್ಯಾಮಲಾ ರತ್ನಕುಮಾರಿ ಪ್ರಾರಂಭದಲ್ಲಿ ನಾಡಗೀತೆ ಹಾಡಿದರು. ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜ್ ವಂದನಾರ್ಪಣೆ ಮಾಡಿದರು.

# ಪುಸ್ತಕ ಪರಿಚಯ

೧. ಬರಡು ಬರಹಗಳು
೨. ಕಾವ್ಯದ ಒಂದು ಚುಂಗನ್ನು ಹಿಡಿದು.
೩. ಸುದ್ದಿ ಸಂಕಮ್ಮ

ಈ ಮೂರು ಪುಸ್ತಕಗಳ ಲೇಖಕರು :
**ಶ್ರೀಮತಿ ಎಚ್. ವಿ. ಸಾವಿತ್ರಮ್ಮ ರಾಮಸ್ವಾಮಿ.**

ಪ್ರಕಾಶಕರು: ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು-೧೯

ಪುಟಗಳು : 1. xiv+74 2. xiv+114 3. xvi+96

ಬೆಲೆ : ೧. ರೂ. ೪೦/- ೨. ರೂ. ೬೦/-೩. ರೂ. ೫೦/-

ಖ್ಯಾತ ಲೇಖಕರಾಗಿದ್ದ ದಿವಂಗತ ಬಿ. ರಾಮಸ್ವಾಮಿಯವರ ಪತ್ನಿ ಶ್ರೀಮತಿ ಎಚ್. ವಿ. ಸಾವಿತ್ರಮ್ಮ ರಾಮಸ್ವಾಮಿ ಅವರು ತಮ್ಮ ೯೦ರ ಇಳಿ ವಯಸ್ಸಿನಲ್ಲಿ, ತಮ್ಮ ಅಪಾರ ಅನುಭವದ ಹಿನ್ನೆಲೆಯಲ್ಲಿ ಮೇಲ್ಕಂಡ ಮೂರು ಕೃತಿಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರವನ್ನು ಸಂಪನ್ನಗೊಳಿಸಿದ್ದಾರೆ ವಿಶಿಷ್ಟ ರೀತಿಯ ಕೃತಿ **'ಬರಡು ಬರಹ'**ದಲ್ಲಿ ಮಲ್ಲೇಶ್ವರಂ ಹಿಂದೆ ಹೇಗಿತ್ತು ಈಗ ಹೇಗೆ ಪರಿವರ್ತನೆಗೊಂಡಿದೆ ಎಂಬುದನ್ನು ಸರಳ ಸುಂದರ ಭಾಷೆಯಲ್ಲಿ ನಿರೂಪಿಸಿದ್ದಾರೆ.




ಲೇಖಕರು ಈ ಬರಹಗಳನ್ನು 'ಬರಡು ಬರಹ'ಗಳೆಂದು ಹೆಸರಿಸಿದ್ದರೂ ಈ ೨೬ ಲೇಖನಗಳಲ್ಲಿ ಒಂದೂ ಬರಡಾಗಿ ಕಾಣಿಸುವುದಿಲ್ಲ. ಅದೇ ಈ ಲೇಖನಗಳ ವೈಶಿಷ್ಟ್ಯ.




**'ಕಾವ್ಯದ ಒಂದು ಚುಂಗನ್ನು ಹಿಡಿದು'** ಸಾಹಿತ್ಯ ಚಿಂತನೆಗಳ ಸಂಕಲನ. ಇದರಲ್ಲಿ ೧೯ ಲೇಖನಗಳಿವೆ. ಇವುಗಳಲ್ಲಿ ಲೇಖಕರು ಸಾಹಿತ್ಯದ ಬಗ್ಗೆ ಚಿಂತನ ನಡೆಸಿದ್ದಾರೆ. ಅನುಭವದ ಮಂಥನ ನಡೆಸಿ ವಿಮರ್ಶೆ-ವಿಶ್ಲೇಷಣೆಯ ಸ್ವಾದನೀಯ ಮಕರಂದ ಉಣಬಡಿಸಿದ್ದಾರೆ. ಇಲ್ಲಿ ಇವರ ಸ್ತ್ರೀ ಚಿಂತನೆ, ದಿವ್ಯ ಚಿಂತನೆ, ಕನ್ನಡ ಚಿಂತನೆ, ವಿಚಾರಧಾರೆ ತ್ರಿವೇಣಿ ಸಂಗಮ ವಾಗಿದೆ.




'ಸುದ್ದಿ ಸಂಕಮ್ಮ' ಸೃಜನಶಕ್ತಿಯನ್ನು ಹೊರಹೊಮ್ಮಿಸಿರುವ ಕಥೆಗಳು. ಸಂಕಲನದಲ್ಲಿ ೨೪ ಕಥೆಗಳಿವೆ. ಅನುಭವದ ಹಿನ್ನೆಲೆಯಲ್ಲಿ ಮೂಡಿಬಂದಿರುವ ಕಥೆಗಳು ಆಕರ್ಷಕವಾಗಿವೆ. ಚೆನ್ನಾಗಿ ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿ ಕಥಾ ಸಾಹಿತ್ಯ ಪ್ರಕಾರವನ್ನು ಸಂಪನ್ನಗೊಳಿಸಿವೆ.

೯೦ರ ಹರೆಯದಲ್ಲಿ ಸಾಹಿತಿಯಾಗಿರುವ ಪ್ರಬುದ್ಧೆ ಸಾವಿತ್ರಮ್ಮ ರಾಮಸ್ವಾಮಿಯವರ ಲೇಖನಿಯಿಂದ ಇನ್ನೂ ಉತ್ತಮ ಕೃತಿಗಳು ಹೊರಬರಲಿ ಎಂದು ಆಶಿಸೋಣ.

**ಹರಿದಾಸರು ಕಂಡ ರಾಮಾನುಜ ದರ್ಶನ**

ಲೇಖಕರು : **ಡಾ. ನಾ. ಗೀತಾಚಾರ್ಯ**

ಪ್ರಕಾಶಕರು : ನಾರಾಯಣ ಶರ್ಮ ಸಾಂಸ್ಕೃತಿ ಕೇಂದ್ರ, ೨೩/೨, ೫ನೇ ಕ್ರಾಸ್ ಕೆ.ಜಿ. ನಗರ ಬೆಂಗಳೂರು-೧೯

ಪ್ರಕಟಣೆ : ೨೦೧೦, ಪುಟಗಳು: ೧೨೮, ಬೆಲೆ : ರೂ. ೧೦೦/

ನಾರಾಯಣ ಸಂಸ್ಕೃತಿ ಕೇಂದ್ರವು ಹರಿದಾಸ ಸಾಹಿತ್ಯ ಪ್ರಕಟಣೆಯಲ್ಲಿ ಮುಂಚೂಣಿಯಲ್ಲಿರುವ ಸಂಸ್ಥೆ. ದ್ವೈತ-ಅದ್ವೈತ-ವಿಶಿಷ್ಟಾದ್ವೈತ ತತ್ವಗಳಿಂದ ಕೂಡಿದ ಸಾಹಿತ್ಯವನ್ನು ಶ್ರೀವೈಷ್ಣವ ಹರಿದಾಸ ಮಾಲೆಯ ಮೂಲಕ ಪ್ರಕಟಿಸುತ್ತಿವೆ. ಈ ಕೃತಿ ಈ ಮಾಲೆಯ ೧೧ನೇ ಪ್ರಕಟಣೆ. ರಾಮಾನುಜ ದರ್ಶನ ಅಥವಾ ಶ್ರೀವೈಷ್ಣವ ತತ್ವಗಳನ್ನೊಳಗೊಂಡಂಥ ಕೀರ್ತನೆಗಳು ಇಲ್ಲಿವೆ. ಕನ್ನಡ ಸಾಹಿತ್ಯದಲ್ಲಿ ಶ್ರೀವೈಷ್ಣವ ತತ್ವವು ಅಭಿವ್ಯಕ್ತಿಯ ಒಂದು ಮಾದರಿಯಾಗಿದೆ. ಈ ಕೃತಿ ಸಾಹಿತ್ಯಾಸಕ್ತರಿಗೆ ಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.

**ಬೆಂಗಳೂರು ಕೆಂಪೇಗೌಡ** : (ಜೀವನ ವೃತ್ತಾಂತ)

ಲೇಖಕರು : **ಪ್ರೊ. ಡಿ. ಲಿಂಗಯ್ಯ**

ಪ್ರಕಾಶಕರು : ದಿನಕರ ಪ್ರಕಾಶನ, ೬೯೦, ೭ನೇ ಬ್ಲಾಕ್ ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೮೫
ಪುಟಗಳು : ೮೮, ಬೆಲೆ: ರೂ. ೫೦/-, ಮುದ್ರಣ : ೨೦೧೧.




ವಿಜಯನಗರ ಸಾಮ್ರಾಜ್ಯ ಕಾಲದಲ್ಲಿದ್ದ ನಾಡಭೂಪಾಲರಲ್ಲಿ ಬೆಂಗಳೂರಿನ ಕೆಂಪೇಗೌಡ ಮೇರುಪುರುಷ. ಇವರು ತಮ್ಮ ಜನಪರ ಕಾರ್ಯಕ್ರಮ ಹಾಗೂ ಶೌರ್ಯ ಪ್ರದರ್ಶನದಿಂದಾಗಿ ಜನಮಾನಸದಲ್ಲಿ ಚಿರಸ್ಥಾಯಿಯಾದ ಸ್ಥಾನ ಗಳಿಸಿದ್ದಾರೆ. ಇವರ ಸಂಕ್ಷಿಪ್ತ ಜೀವನ ವೃತ್ತಾಂತಗಳನ್ನು ಕನ್ನಡ ನಾಡಿನ ಹಿರಿಯ ಜಾನಪದ ತಜ್ಞ, ಕವಿ, ವಿಮರ್ಶಕ, ಪ್ರಬಂಧಕಾರ ಪ್ರೊ. ಡಿ. ಲಿಂಗಯ್ಯನವರು ಅಧಿಕಾರಯುತವಾಗಿ ದಾಖಲಿಸಿ ಇತಿಹಾಸಕ್ಕೆ ನ್ಯಾಯ ದೊರಕಿಸಿಕೊಟ್ಟಿರುತ್ತಾರೆ.

ಹಿರಿಯ ಕೆಂಪೇಗೌಡ ಹುಟ್ಟಿನಿಂದ ಮಾತ್ರವಲ್ಲ ಸಾಧನೆಯಿಂದಲೂ 'ಹಿರಿಯ' ಎಂಬುದನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಇದೊಂದು ಓದುವುದಕ್ಕಲ್ಲದೆ ಸಂಗ್ರಹಿಸಿಡಲೂ ಯೋಗ್ಯ ಕೃತಿಯಾಗಿದೆ.

**ಕರ್ನಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯ**

ಲೇಖಕರು : **ಪ್ರೊ. ಜಿ. ಅಶ್ವತ್ಥನಾರಾಯಣ**

ಪ್ರಕಾಶಕರು : **ಉಲುಚುಕಮ್ಮೆ ಬ್ರಾಹ್ಮಣ ಮಹಾಸಭಾ.**

ನಂ. ೩೩, ಹೆಚ್. ಸಿದ್ಧಯ್ಯ ರಸ್ತೆ, ವಿಲ್ಸನ್ ಗಾರ್ಡನ್, ಬೆಂಗಳೂರು-೨೭

ಬೆಲೆ: ರೂ. ೫೦/-, ಪುಟಗಳು: ೬೮, ಪ್ರಕಟಣೆ : ೨೦೧೦

ಮೇಲ್ಕಂಡ ಮಹಾಸಭೆಯು 'ಸಾಧಕರ ಮಾಲೆಯಡಿ' ಕನ್ನಡ ಸಾಹಿತ್ಯ ಸಂಸ್ಕೃತಿಗೆ ಅಪೂರ್ವ ಕೊಡುಗೆಗಳನ್ನು ಕೊಟ್ಟಿರುವವರ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಸ್ತುತ್ಯರ್ಹ ಕೆಲಸವನ್ನು ಮಾಡುತ್ತಾ ಬಂದಿರುತ್ತಾರೆ. ಈ ಮಾಲೆಯಡಿ ಹೊಸ ಗದ್ಯ ಸಾಹಿತ್ಯದ ಶ್ರೀಮಂತಿಕೆಯನ್ನು ಬೆಳೆಸಿ ಶಿಕ್ಷಣ, ಇತಿಹಾಸ, ಆಧ್ಯಾತ್ಮ ಇತ್ಯಾದಿ ಅನೇಕ ವಿಷಯಗಳ ಬಗ್ಗೆ ೮೦ ಕೃತಿಗಳನ್ನು ರಚಿಸಿರುವ ಈ ಹಿರಿಯ ಸಾಹಿತಿಯನ್ನು ಪರಿಚಯಿಸುವ ಕೆಲಸ ಪ್ರೊ. ಅಶ್ವತ್ಥನಾರಾಯಣ ಅವರು ಬಹಳ ಪ್ರಬುದ್ಧ ರೀತಿಯಲ್ಲಿ ಮಾಡಿ ಸರ್ವಜನ ಮನ್ನಣೆಗೆ ಅರ್ಹರಾಗಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡ ಜಾಗೃತಿಯನ್ನುಂಟು ಮಾಡಿದ್ದಲ್ಲದೆ ಆದರ್ಶ ಬದುಕು ನಡೆಸಿ ಶ್ರೇಷ್ಠ ಗ್ರಂಥಗಳನ್ನು ರಚಿಸಿ ಮುಂದಿನ ಜನಾಂಗಕ್ಕೆ ಮಾರ್ಗದರ್ಶಕರೂ ಸ್ಫೂರ್ತಿದಾಯಕರೂ ಆಗಿದ್ದಾರೆ ಎಂಬುದು ಪ್ರೊ. ಅಶ್ವತ್ಥನಾರಾಯಣ ಅವರ ಲೇಖನಿಯಲ್ಲಿ ಮೂರ್ತಗೊಂಡಿದೆ. ಇದು ನಿಜವಾಗಿಯೂ ಎಲ್ಲರ ಮನೆಯ ಗ್ರಂಥಾಲಯಗಳಲ್ಲೂ ಇರಬೇಕಾದ ಕೃತಿಯಾಗಿದೆ.

**'ಮಾತನಾಡಿ ಗೊಂಬೆಗಳೆ'** (ಮಕ್ಕಳ ನಾಟಕಗಳ ಸಂಗ್ರಹ) ಲೇಖಕಿ : ಶ್ರೀಮತಿ ಶಾರದಾ ವಿ. ಮೂರ್ತಿ, ಪ್ರಕಟಣೆ: ನೇತ್ರಾವತಿ ಪ್ರಕಾಶನ. ನಂ. ೮೯, ೧೧ನೇ ಅಡ್ಡರಸ್ತೆ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-೨೮. ಪುಟಗಳು : ೧೬೦, ಬೆಲೆ : ರೂ. ೯೦/- ಮುದ್ರಣ ೨೦೦೭.

ಈ ಸಂಕಲನದಲ್ಲಿ ಮಕ್ಕಳಿಗಾಗಿ ವಿಶೇಷ ಆಸ್ಥೆ ವಹಿಸಿ ರಚಿಸಿರುವ ಹದಿನಾಲ್ಕು ಕಿರುನಾಟಕಗಳಿವೆ. ಇವುಗಳು ಆಕಾಶವಾಣಿ, ದೂರದರ್ಶನ ಕೇಂದ್ರಗಳಲ್ಲಿ ಪ್ರಸಾರಗೊಂಡಿರುವುದಲ್ಲದೆ ಕೆಲವು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಈ ನಾಟಕಗಳಲ್ಲಿ ಕೆಲವೆಡೆ ಲಾವಣಿಗಳು, ಸಣ್ಣ ಕವನಗಳು ಇರುವುದು ಈ ಕೃತಿಯ ವೈಶಿಷ್ಟ್ಯ ಹೆಚ್ಚಿಸಿದೆ. ಸರಳ, ಸುಂದರ ಭಾಷೆ ಮಕ್ಕಳಿಗೆ ಇಷ್ಟವಾಗುವುದರಲ್ಲಿ ಸಂದೇಹವಿಲ್ಲ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ನಡೆಸಿದ ಸಾವಿತ್ರಮ್ಮ ಮಕ್ಕಳ ಸಾಹಿತ್ಯ ದತ್ತಿ ಸ್ಪರ್ಧೆಯಲ್ಲಿ (೨೦೧೧) ಬಹುಮಾನ ಗಳಿಸಿರುವುದಲ್ಲದೆ ಮೌಲ್ಯಮಾಪಕರ ಪ್ರಶಂಸೆಗೆ ಪಾತ್ರವಾಗಿದೆ. ಪ್ರಶಸ್ತಿ ಪ್ರದಾನ ಸಮಾರಂಭ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ೬-೫-೧೧ ರಂದು ನಡೆಯಿತು.

---

## ಸಾದರ-ಸ್ವೀಕಾರ

೧. **'ಜನ ಸೇವಾ ಪರಾಯಣ** : ಆರ್. ಜೈಮುನಿರಾವ್ ಜಾದವ್ ಜೀವನ ಚರಿತ್ರೆ, ಲೇಖಕರು : ಎನ್. ಮೀರಾದೇವಿ. ಪ್ರಕಾಶಕರು: ಮೀರಾ ಪ್ರಕಾಶನ, ೯೮, ೩೪ 'ಡಿ' ಅಡ್ಡರಸ್ತೆ, ೧೬ನೇ ಮುಖ್ಯರಸ್ತೆ, ೪ನೇ'ಟಿ' ಬ್ಲಾಕ್
ಮುದ್ರಣ : ೨೦೧೧, ಜಯನಗರ, ಬೆಂಗಳೂರು-೪೧
ಪುಟಗಳು : ೨೫೦. ಬೆಲೆ : ರೂ. ೨೦೦/-

೨. **ದಾಸಾಮೃತವಾಣಿ-ಒಂದು ಒಳ ನೋಟ** (ಹರಿಕಥಾಮೃತಸಾರ ಮತ್ತು ಶ್ರೀನಿವಾಸ ಕೀರ್ತನೆಯ ಭಾಷ್ಯ).
ಲೇಖಕರು : ಶ್ರೀ ವಿದ್ಯಾಧರ ಮುತಾಲಿಕ ದೇಸಾಯಿ
ಪ್ರಕಾಶಕರು : ಶ್ರೀವತ್ಸ ಪ್ರಕಾಶನ. ಧಾರವಾಡ,
ಬೆಲೆ:ರೂ. ೯೦. ಪುಟಗಳು: X+೧೨೦. ಪ್ರಕಟಣೆ: ೧೧.

೩. **ಕೃಷ್ಣಂ ವಂದೇ ಜಗದ್ಗುರುಂ.** (ಪ್ರಚಾರ, ಚಿತ್ರಮಯ ಬರವಣಿಗೆ).
ಲೇಖಕರು : ಗುರುರಾಜ ಪೋ ಶೆಟ್ಟಿಹಳ್ಳಿ (ಪ್ರಣವ).
ಪ್ರಕಾಶಕರು : ಪಾಂಚಜನ್ಯ ಪ್ರತಿಷ್ಠಾನ. ಕಾಕೋಳು ಶ್ರೀ ವೇಣುಗೋಪಾಲ ಸ್ವಾಮಿ ದೇವಸ್ಥಾನ ಟ್ರಸ್ಟ್ (ರಿ.) ಕಾಕೋಳು ಕ್ಷೇತ್ರ, ಬೆಂಗಳೂರು-೮೯
ಬೆಲೆ: ರೂ. ೨೦/- ಪುಟಗಳು: ೨೪. ಪ್ರಕಟಣೆ : ೧೧.

೪. **ಹರಿದಾಸರು ಸ್ತುತಿಸಿದ ಶ್ರೀಪಾದರಾಜರು** (ಕೀರ್ತನೆಗಳ ಸಂಕಲನ) ಮತ್ತು **ಬೇರು ಗಿಡ ಮತ್ತು ಎಲೆ** (ವಿಮರ್ಶಾ ಸಂಕಲನ)
ಎರಡೂ ಕೃತಿಗಳ ಲೇಖಕರು : ಹಣಮಂತ ತಾಸಗಾಂವಕರ.
ಪ್ರಕಾಶಕರು : ಕಲಾ ಪ್ರಕಾಶನ ನಂ೨, ೨ನೇ ಅಡ್ಡರಸ್ತೆ
ಮುನೇಶ್ವರ ಬ್ಲಾಕ್, ರಾಜಮಹಲ್ ಗುಟ್ಟಹಳ್ಳಿ,
ಬೆಂಗಳೂರು-೫೬೦ ೦೦೩,
ಪುಟಗಳು ಕ್ರಮವಾಗಿ : ೮೦, ೮೦
ಬೆಲೆ : ರೂ. ೬೦/-, ರೂ. ೬೦/-, ಮುದ್ರಣ : ೨೦೧೦.

## ಅಭಿನಂದನೆಗಳು

೧. **ಸರಸ್ವತಿ ಸಮ್ಮಾನ್ ಪ್ರಶಸ್ತಿ** : (೨೦ನೇಯದು, ೨೦೦೦-೦೯) ಡಾ. ಎಸ್. ಎಲ್. ಭೈರಪ್ಪ ಅವರ 'ಮಂದ್ರ' ಕಾದಂಬರಿ ಈ ಪ್ರಶಸ್ತಿಗೆ ಆಯ್ಕೆಗೊಂಡಿದೆ. ೭.೫೦ ಲಕ್ಷ ನಗದು ಮತ್ತು ಸ್ಮರಣಿಕೆ ಒಳಗೊಂಡಿರುತ್ತದೆ. ಈ ಪ್ರಶಸ್ತಿ ಕೆ. ಕೆ. ಬಿರ್ಲಾ ಪ್ರತಿಷ್ಠಾನದ ಕೊಡುಗೆ. (ಪ್ರಕಟಣೆ ಪ್ರಜಾವಾಣಿ ದಿನಾಂಕ ೬-೪-೧೧).

೨. **ಗೌರವ ಡಾಕ್ಟರೇಟ್** : ಮೈಸೂರು ವಿಶ್ವವಿದ್ಯಾನಿಲಯ ದಿ॥ ನಾಲ್ವಡಿ ಕೃಷ್ಣರಾಜ ಒಡೆಯರ್ (ಮರಣೋತ್ತರ) ಸರೋದ್ ವಾದಕ ರಾಜೀವ ತಾರಾನಾಥ್, ಕೇಂದ್ರ ಕಾನೂನು ಸಚಿವ ಡಾ. ವೀರಪ್ಪ ಮೊಯಿಲಿ, ನಾರಾಯಣ ಹೃದಯಾಲಯದ ವ್ಯವಸ್ಥಾಪಕ ನಿರ್ದೇಶಕ ಡಾ. ದೇವಿಪ್ರಸಾದ್ ಶೆಟ್ಟಿ ಮತ್ತು ಪಿ.ಇ.ಎಸ್. ಶಿಕ್ಷಣ ಸಂಸ್ಥೆಗಳ ಸ್ಥಾಪಕ ಅಧ್ಯಕ್ಷ ಹಾಗೂ ಶಿಕ್ಷಣ ತಜ್ಞ ಪ್ರೊ. ಎಂ.ಆರ್. ದೊರೆಸ್ವಾಮಿ ಅವರಿಗೆ ತಾ॥ ೧೧-೪-೧೧ರಂದು ಗೌ. ಡಾಕ್ಟರೇಟ್ ನೀಡಿ ಗೌರವಿಸಿದೆ.

೩. **ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ-(೨೦೧೦)**: ಖ್ಯಾತ ಸಾಹಿತಿ ಪ್ರೊ. ವೃಷಭೇಂದ್ರಸ್ವಾಮಿ, ವಿಮರ್ಶಕ ಡಾ. ಹೆಚ್.ಎಸ್. ರಾಘವೇಂದ್ರ, ಲೇಖಕ ಡಾ. ಶ್ರೀಕಂಠ ಕೂಡಿಗೆ, ಕವಯಿತ್ರಿ ಪ್ರೊ. ಸ. ಉಷಾ ಮತ್ತು ಲೇಖಕ ಕೋಟೆಗಾನಹಳ್ಳಿ ರಾಮಯ್ಯ ಅವರುಗಳಿಗೆ ೨೦೧೧ನೇ ಸಾಲಿನ ಗೌರವ ಪ್ರಶಸ್ತಿ ಹಾಗೂ ೧೦ ಲೇಖಕರಿಗೆ ೨೦೦೯ನೇ ಸಾಲಿನ ಪುಸ್ತಕ ಬಹುಮಾನ ನೀಡಲಾಗಿದೆ.

೪. **ಡಿ. ದೇವರಾಜ್ ಅರಸು ಪ್ರಶಸ್ತಿ**- ರಾಜ್ಯ ಸರ್ಕಾರ ನೀಡುವ ಈ ಪ್ರಶಸ್ತಿಯನ್ನು ಧರ್ಮಸ್ಥಳದ ಡಾ. ವೀರೇಂದ್ರ ಹೆಗ್ಗಡೆಯವರಿಗೆ ನೀಡಲಾಗಿದೆ. (೮-೪-೧೧)

೫. ಬಸವಶ್ರೀ ಪ್ರಶಸ್ತಿ-(೨೦೧೧) : 'ವಚನ ಸಾಹಿತ್ಯ ಶ್ರೀ' ಪ್ರಶಸ್ತಿಯನ್ನು ಡಾ. ವೀಣಾ ಬನ್ನಂಜೆ ಅವರಿಗೆ, 'ಬಸವಶ್ರೀ' ಪ್ರಶಸ್ತಿಯನ್ನು ರಂಗತಜ್ಞ ಡಾ. ಏಣಗಿ ಬಾಳಪ್ಪ ಅವರಿಗೆ ೮-೫-೧೧ ರಂದು ನೀಡಲಾಗಿದೆ.

೬. **ಕರ್ನಾಟಕ ರತ್ನ ಪ್ರಶಸ್ತಿ** : ೨೦೦೮ನೇ ಸಾಲಿನ ಪ್ರಶಸ್ತಿ ಡಾ. ದೇ. ಜವರೇಗೌಡ ಅವರಿಗೆ, ೨೦೦೯ನೇ ಸಾಲಿನ ಪ್ರಶಸ್ತಿಯನ್ನು ಡಾ. ವೀರೇಂದ್ರ ಹೆಗ್ಗಡೆ ಅವರಿಗೆ ಕರ್ನಾಟಕ ಸರ್ಕಾರ ನೀಡಿ ಪುರಸ್ಕರಿಸಿದೆ. (೧೦-೫-೧೧).

೭. **ಡಾ. ಚಿದಾನಂದ ಪ್ರಶಸ್ತಿ-(೨೦೧೦)**: ಭಾಷಾ ವಿಜ್ಞಾನಿ ಡಾ. ಕುಶಾಲಪ್ಪ ಗೌಡರಿಗೆ ಸಂದಿದೆ.

೮. **ಅನುಪಮಾ ಪ್ರಶಸ್ತಿ** (೨೦೧೧) : ಕರ್ನಾಟಕ ಲೇಖಕಿಯರ ಸಂಘ ನೀಡುವ ಡಾ. ಅನುಪಮಾ ಪ್ರಶಸ್ತಿ (೨೦೧೧). ಡಾ. ವಿಜಯಾ ಅವರಿಗೆ ಸಂದಿದೆ.

೯. **ಅ.ನ.ಕೃ. ಪ್ರಶಸ್ತಿ** (೨೦೧೧): ಖ್ಯಾತ ಲೇಖಕ ಪ್ರೊ. ಅ.ರಾ. ಮಿತ್ರರವರಿಗೆ ೨೬-೬-೧೧ ರಂದು ನೀಡಲಾಗಿದೆ. (೧ ಲಕ್ಷ ನಗದು ಮತ್ತು ಪ್ರಶಸ್ತಿ ಪತ್ರ).

೧೦. **ಮಾಸ್ತಿ ಪ್ರಶಸ್ತಿ** (೨೦೧೧) : ಡಾ. ವೀಣಾ ಶಾಂತೇಶ್ವರ (ಸೃಜನಶೀಲ) ಶ್ರೀಮತಿ ವೈದೇಹಿ (ಸೃಜನಶೀಲ) ಡಾ. ವಿಜಯಾ (ನಾಟಕ) ಇವರುಗಳಿಗೆ ಸಂದಿದೆ.

೧೧. **ಕರ್ನಾಟಕ ಭಾಷಾ ಭೂಷಣ ಸಂಶೋಧನ ಪ್ರಶಸ್ತಿ** (೨೦೧೧): ಕರ್ನಾಟಕ ಸಂಶೋಧಕರ ಒಕ್ಕೂಟ ನೀಡುವ ಈ ಪ್ರಶಸ್ತಿ ಸಾಹಿತಿ, ವಿಮರ್ಶಕ ಭಾಷಾತಜ್ಞ ಡಾ.ಕೆ.ವಿ. ನಾರಾಯಣ ಅವರಿಗೆ ಸಂದಿದೆ.

## ಶ್ರದ್ಧಾಂಜಲಿ

೧೫-೫-೨೦೧೧ : **ಸುಜನಾ (ಪ್ರೊ. ಎಸ್. ನಾರಾಯಣ ಶೆಟ್ಟಿ) (೮೧)**: ಖ್ಯಾತ ಸಾಹಿತಿ, ವಿಮರ್ಶಕ, ನಿವೃತ್ತ ಪ್ರಾಧ್ಯಾಪಕ. ಕೇಂದ್ರ ಸಾಹಿತ್ಯ ಅಕಾಡೆಮಿ ಹಾಗೂ ಹಲವು ಪ್ರತಿಷ್ಠಿತ ಪುರಸ್ಕಾರ ಪ್ರಶಸ್ತಿಗಳಿಗೆ ಭಾಜನರಾಗಿದ್ದವರು. ದಿನಾಂಕ: ೧೫-೫-೧೧ ರಂದು ಮೈಸೂರಿನಲ್ಲಿ ನಿಧನರಾದರು.

೭-೬-೧೧ : ಮೈಸೂರು ರಂಗಾಯಣದ ನಿರ್ದೇಶಕ, ಖ್ಯಾತ ಲೇಖಕ, ವಿಮರ್ಶಕ, ರಂಗಕಲಾವಿದ, **ಭಾಷಾತಜ್ಞ, ಪ್ರೊ. ಲಿಂಗದೇವರು ಹಳೇಮನೆ** (೬೨) ಮೈಸೂರಿನಲ್ಲಿ ಹೃದಯಾಘಾತದಿಂದ ನಿಧನರಾದರು.

೮-೬-೧೧ ಅಂತರಾಷ್ಟ್ರೀಯ ಖ್ಯಾತ ಚಿತ್ರಕಲಾವಿದ **ಹುಸೇನ್ ಮಕ್ಬೂಲ್ ಫಿದಾ ಹುಸೇನ್** (೯೫) ಲಂಡನ್ನಿನಲ್ಲಿ ನಿಧನರಾದರು.

೮-೬-೧೧ **ಶಿಲ್ಪಿ ಕೆ. ಶಾಮರಾಯ ಆಚಾರ್ಯ** ಕಾರ್ಕಳದಲ್ಲಿ ನಿಧನರಾದರು. ಇವರು ರಾಜ್ಯ ಶಿಲ್ಪಕಲಾ ಅಕಾಡೆಮಿಯ ಮಾಜಿ ಅಧ್ಯಕ್ಷರು (೧೯೮೫). ಜಕಣಾಚಾರಿ ಪ್ರಶಸ್ತಿ ಪುರಸ್ಕೃತರು. (ಜನನ ೧೯೨೬).

ಅಚ್ಚಾದ ಪುಸ್ತಕ

ತೆರೆದ-ಅಂಚೆ

239. ಶ್ರೀ ಪೂರ್ಣಪ್ರಜ್ಞ
ನಂ.1?4, 2ನೇ ಮುಖ್ಯರಸ್ತೆ,
4ನೇ ಬ್ಲಾಕ್, 3ನೇ ಫೇಸ್,
ಬನಶಂಕರಿ 3ನೇ ಘಟ್ಟ,
ಬೆಂಗಳೂರು - 560085.



ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭

ಮುದ್ರಕರು : 'ಇಳಾ ಮುದ್ರಣ' ನಂ.೨೬, ೪೦ ಅಡಿರಸ್ತೆ, ರಾಘವೇಂದ್ರ ನ್ಯೂ ಟಿಂಬರ್ ಯಾರ್ಡ್ ಲೇಔಟ್, ಬೆಂಗಳೂರು-೨೬, ✆: ೨೬೭೫೭೧೫೪
'ವಾರ್ತಾಪತ್ರ' ಪ್ರಾಯೋಜಕರು : ಇಳಾಮುದ್ರಣ, ಬೆಂಗಳೂರು-೨೬